ಬಿ. ಎಂ. ಚಂದ್ರಶೇಖರಯ್ಯ

# ಪಾಂಡುರಂಗ ನಿರಾಕರಿಸಿದ ಭವ್ಯಮಂದಿರ

ಇಂತಿಂತು ನೋಡುತುಂಬರೆ
ಮುಂತಿರ್ದುದು ತರಳ ತರತರಂಗ ಪ್ರಯುತಾ
ನಂತನವಫೇನ ಜಲಚರ
ಸಂತಾನಂ ತುಂಗಭದ್ರೆ, ಗಂಗಾ ಪ್ರಾಯಂ ॥

ನೆನೆದನೆ ಧನ್ಯಂ ನೋಡಿದ
ನನಘಂ ಸೋಂಕಿದವನಮರ ನಘಮರ್ಷಣಮಿ
ರ್ದನೆ ಮುಕ್ತಂ ಕೇಳ ತುಂಗಭದ್ರೆಯ ಜಳಮಂ ॥

ಎಂದು ತುಂಗಭದ್ರೆಯನ್ನು ಮಹಾಕವಿ ಹರಿಹರನು ಮುಕ್ತಕಂಠದಿಂದ ಹೊಗಳಿದ್ದಾನೆ. ಪುರಾಣ ಪ್ರಸಿದ್ಧ ಈ ಪಂಪಾ ಪರಿಸರದಲ್ಲಿ ತುಂಗಭದ್ರೆಯ ದಡದ ಮೇಲೆ ಜಗತ್ತು ಕಂಡು ಕೇಳರಿಯದ ನಗರ ವಿಜಯನಗರವು ಸ್ಥಾಪನೆಯಾಗಿ, ಶ್ರೇಯೋಭಿವೃದ್ಧಿ ಸಾಧಿಸಿತು ; ಅದ್ಭುತ ಪ್ರಮಾಣದಲ್ಲಿ ವಿಸ್ತಾರವನ್ನೂ ಸಮೃದ್ಧಿಯನ್ನೂ ಪಡೆದು ದೇಶಾಂತರಗಳಲ್ಲಿ ಪ್ರಖ್ಯಾತವಾಯಿತು. ಪ್ರಪಂಚದಲ್ಲೇ ಅಸದೃಶವೆಂಬ ಕೀರ್ತಿಯಿಂದ ಶೋಭಿಸಿತು. ವಿಜಯನಗರದ ಈ ಸೌಂದರ್ಯ, ವಿಸ್ತಾರ ಮತ್ತು ವೈಭವಕ್ಕೆ ನೆರವಾದವಳು ತುಂಗಭದ್ರೆ. ಈ ನದಿಯು ಒದಗಿಸಿದ ಅಪಾರ ಜಲಭಾಂಡಾರ, ಜಲಸೌಕರ್ಯ, ನೀರಾವರಿ ಮೊದಲಾದ ಸಂಪನ್ಮೂಲಗಳಿಂದ ವಿಜಯನಗರದ ಬೆಳವಣಿಗೆ ಅಬಾಧಿತವಾಗಿ ನಡೆಯಿತು.

ತುಂಗಭದ್ರಾ ಪ್ರದೇಶದಲ್ಲಿ ವಿಪುಲವಾಗಿ ದೊರೆಯುವ ಶಿಲಾ ಸಮೂಹವೇ ವಿಜಯನಗರದ ದೇವಾಲಯಗಳ ನಿರ್ಮಾಣಕ್ಕೆ ಸಹಾಯವಾಯಿತು. ವಿಜಯನಗರದ ಶಿಲ್ಪಿಗಳ ಕಲಾತ್ಮಕ ಕೈಗಳಲ್ಲಿ ಈ ಕಪ್ಪುಶಿಲೆಗಳು ಸುಂದರ ಮೂರ್ತಿಗಳಾಗಿಯೂ ಭವ್ಯ ದೇವಾಲಯಗಳಾಗಿಯೂ ಪರಿವರ್ತನೆಗೊಂಡವು.

ದ್ರಾವಿಡ ಮತ್ತು ಹೊಯ್ಸಳ ಶೈಲಿಗಳ ಸಂಯೋಜನೆಯನ್ನು ರೂಢಿಸಿ. ರೂಪಿಸಿಕೊಂಡ ವಿಜಯನಗರ ಶಿಲ್ಪಿಗಳು 'ವಿಜಯನಗರ ಶೈಲಿ'ಯೆಂದೇ ಕರೆಯಲಾದ ನವೀನವೂ ಖಚಿತವೂ ಆದ ಶೈಲಿಯ ಪ್ರವರ್ತಕರಾದರು. ವಿಸ್ತಾರವಾದ ಆವರಣ, ಭವ್ಯ ಮಂಟಪಗಳು, ಕಂಬಗಳ ಕೆತ್ತನೆಯಲ್ಲಿ ತಮ್ಮದೇ ಆದ ವೈಶಿಷ್ಟ್ಯ— ಇವು ವಿಜಯನಗರ ಶೈಲಿಯ ಮುಖ್ಯ ಲಕ್ಷಣಗಳು. ಈ ಶೈಲಿಯಲ್ಲಿ ಕುಶಲ ಶಿಲ್ಪಿಗಳು ಶ್ರಮವಹಿಸಿ ಬಹು ಎಚ್ಚರದಿಂದ ರಚಿಸಿದ ಕಟ್ಟಡವೇ ಜಗತ್ಪ್ರಸಿದ್ಧ ಸುಂದರ ವಿಜಯ ವಿಠ್ಠಲನ ಮಂದಿರ.

ತುಂಗಭದ್ರೆಯ ಬಲದಂಡೆಯ ಮೇಲೆ ನಿಂತಿರುವ ವಿಜಯ ವಿಠ್ಠಲನ ಮಂದಿರವು ಹಂಪೆಯ ಧಾರ್ಮಿಕ ಮಹಾಮಂದಿರಗಳಲ್ಲೇ ಅತ್ಯಂತ ಭವ್ಯವಾದುದು. ಆದರೆ, ಈ ಭವ್ಯಮಂದಿರವು ಅಪೂರ್ಣವಾಗಿದ್ದು, ವಿಠ್ಠಲನ ಮೂರ್ತಿಯ ಪ್ರತಿಷ್ಠಾಪನೆಯಾಗಲೇ ಇಲ್ಲವೆಂಬ ಅಭಿಪ್ರಾಯವೂ ವಾಡಿಕೆಯಲ್ಲಿದೆ. ಇದಕ್ಕೆ ಪೂರಕವಾಗಿ, ಪಂಢರಪುರದಿಂದ ಬಂದ ಪಾಂಡುರಂಗ ವಿಠ್ಠಲನು ಶ್ರೀನಿವಾಸನಾದರೂ ಮಂದಿರದ ಭವ್ಯತೆ, ವೈಶಾಲ್ಯ ಮತ್ತು ಕಲಾಶ್ರೀಗಳನ್ನು ಕಂಡು ಅಲ್ಲಿ ನೆಲೆಸಲು

ನಿರಾಕರಿಸಿ, ತನ್ನ ಬಡತನದ ಸರಳ ನಿವಾಸಕ್ಕೆ ಹಿಂದಿರುಗಿದನೆಂದು ಹೇಳುವ ದಂತಕತೆಯೊಂದು ಪ್ರಚಲಿತವಿದೆ.

ಆದರೆ ಇದುವರೆವಿಗೆ ದೊರೆತಿರುವ ಕ್ರಿ.ಶ. ೧೫೧೩ ರಿಂದ ೧೫೬೪ರ ಕಾಲದ ಅವಧಿಯ ಸುಮಾರು ೨೩ ಶಾಸನಗಳು ಮತ್ತು ಇತರ ಗ್ರಾಂಥಿಕ ಉಲ್ಲೇಖಗಳು ತಿಳಿಸುವಂತೆ, ಇಲ್ಲಿ ವಿಜಯ ವಿಠ್ಠಲನ ಪೂಜೆಯು ರಕ್ಕಸ ತಂಗಡಿ ಯುದ್ಧಾನಂತರ ವಿಜಯನಗರವು ದಾಳಿಕಾರರ ವಶವಾಗುವವರೆಗೂ ನಿರಂತರವಾಗಿ ನಡೆಯುತ್ತಿತ್ತು.

ಪ್ರೌಢ ದೇವರಾಯನೆಂದು ಪ್ರಸಿದ್ಧನಾದ ಇಮ್ಮಡಿ ದೇವರಾಯನ (೧೪೨೨-೪೬) ದಂಡನಾಯಕನಾಗಿದ್ದ ಪ್ರೋಲುಗಂಟಿ ತಿಪ್ಪನು ಈ ಮಂದಿರಕ್ಕೆ ಭೋಗಮಂಟಪವನ್ನು ನಿರ್ಮಿಸಿದನೆಂದು ತಿಳಿದುಬರುವುದರಿಂದ ಇದು ಕೂಡ ವಿಜಯನಗರದ ಪ್ರಾಚೀನ ಮಂದಿರಗಳಲ್ಲಿ ಒಂದೆಂದು ಹೇಳಬಹುದು. ಅಲ್ಲದೆ ಸ್ವತಃ ಕೃಷ್ಣ ದೇವರಾಯನೇ ವಿಠ್ಠಲನ ಪೂಜೆ, ನೈವೇದ್ಯಗಳಿಗಾಗಿ ಅನೇಕ ಚಿನ್ನ, ಬೆಳ್ಳಿಯ ಹರಿವಾಣಗಳನ್ನು ನೀಡಿದುದಲ್ಲದೆ, ದತ್ತಿಗಳನ್ನು ಬಿಟ್ಟುದುದಾಗಿ ಅಲ್ಲಿರುವ ಶಾಸನದಿಂದಲೇ ತಿಳಿದುಬರುತ್ತದೆ. ಇನ್ನೊಂದು ಶಾಸನವು ತಿಳಿಸುವಂತೆ, ಕೃಷ್ಣದೇವರಾಯನ ಇಬ್ಬರು ರಾಣಿಯರು ರಾಯ ಗೋಪುರಗಳನ್ನು ನಿರ್ಮಿಸಿದುದಲ್ಲದೆ ಬಂಗಾರದ ಹರಿವಾಣಗಳನ್ನು ದೇವಾಲಯಕ್ಕೆ ನೀಡಿದ್ದಾರೆ. ಅಲ್ಲದೆ ಸಾಮ್ರಾಟರಾದ ಅಚ್ಯುತರಾಯ ಮತ್ತು ಸದಾಶಿವರಾಯರು ಅನೇಕ ದತ್ತಿಗಳನ್ನು ನೀಡಿದ ಬಗ್ಗೆ ಶಾಸನಗಳು ತಿಳಿಸುತ್ತವೆ.

**ಅತ್ಯುತ್ತಮ ಮಾದರಿ**

ಹಂಪೆಯ ದೇವಾಲಯಗಳಲ್ಲೆಲ್ಲಾ ಅತಿ ಸುಂದರವಾದ ವಿಠ್ಠಲನ ಮಂದಿರವು ವಿಜಯನಗರ ಶೈಲಿಯ ಅತ್ಯುತ್ತಮ ಮಾದರಿಯೆನ್ನಬಹುದು. ಶಿಲ್ಪಕಲೆಯಲ್ಲಿ ಇದನ್ನು ಮೀರಿಸುವ ಭವ್ಯಮಂದಿರವು ಇಡೀ ದಕ್ಷಿಣ ಭಾರತದಲ್ಲಿಯೇ ಮತ್ತಿಲ್ಲವೆಂದು ಪ್ರಸಿದ್ಧ ಆಂಗ್ಲ ವಿದ್ವಾಂಸ ಲಾಂಗ್‌ಹರ್ಸ್ಟನು ಉದ್ಗರಿಸಿದ್ದಾನೆ.

ಮಂದಿರವು ಅತ್ಯಂತ ವಿಶಾಲವಾದ ಎಂದರೆ ೧೫೨ ಮೀಟರ್ ಉದ್ದ ಮತ್ತು ೯೪ ಮೀಟರ್ ಅಗಲದ ಬೃಹತ್ ಆವರಣವನ್ನೊಳಗೊಂಡಿದ್ದು, ಪೂರ್ವ, ಉತ್ತರ ಮತ್ತು ದಕ್ಷಿಣ ದಿಕ್ಕುಗಳಲ್ಲಿ ವಿಜಯನಗರದ ವಿಶಿಷ್ಟ 'ರಾಯಗೋಪುರ'ಗಳಿಂದ ಕೂಡಿದೆ. ಈಗ ಜೀರ್ಣಾವಸ್ಥೆಯಲ್ಲಿರುವ ಈ ಗೋಪುರಗಳಲ್ಲೆಲ್ಲಾ ದಕ್ಷಿಣದ ಗೋಪುರವು ಅತ್ಯಂತ ಅಲಂಕಾರಿಕವಾದುದು. ಆವರಣದ ಮಧ್ಯದಲ್ಲಿ ವಿಠ್ಠಲನ ಮಂದಿರವಿದ್ದು, ಅಮ್ಮನಗುಡಿ, ಕಲ್ಯಾಣಮಂಟಪ, ಡೋಲೋತ್ಸವ ಮಂಟಪ, ನೂರು ಕಂಬಗಳ ಮಂಟಪ ಮತ್ತು ಪ್ರಸಿದ್ಧ ಕಲ್ಲಿನ ತೇರನ್ನೊಳಗೊಂಡಿದೆ.

**ವ್ಯಾಸರಾಯರ ಪ್ರಭಾವ**

ಕೃಷ್ಣದೇವರಾಯನ ಕಾಲದಲ್ಲಿ ರಾಜಗುರು ವ್ಯಾಸರಾಯರ ಪ್ರಭಾವಕ್ಕೊಳಗಾಗಿ ವಿಠ್ಠಲನ ಮಂದಿರವು ತನ್ನ ಮೂಲ ಆಕಾರವನ್ನೇ ಬದಲಾಯಿಸಿಕೊಂಡು, ಭವ್ಯ ಮಂದಿರವಾಗಿ ಪರಿವರ್ತನೆಗೊಂಡಿತು. ಬಹುಶಃ ಈ ಕಾಲದಲ್ಲೇ ಗರ್ಭಗೃಹದ ಸುತ್ತಲಿನ ಪ್ರದಕ್ಷಿಣಾಪಥದ ನಿರ್ಮಾಣವಾಗಿರಬೇಕು. ಅಲ್ಲದೆ ಸುಂದರ ಅಂತರಾಳ ಮತ್ತು ನೂರು ಕಂಬಗಳ ಮಂಟಪಗಳು ಕೂಡಾ ವಿಜಯನಗರ ಶೈಲಿಗೆ ಕೃಷ್ಣದೇವರಾಯನು ನೀಡಿದ ಉತ್ತಮ ಕಲಾಕೃತಿಗಳಾಗಿವೆ.

ಕೃಷ್ಣದೇವರಾಯನ ಆಳ್ವಿಕೆಯ ಕಾಲದಲ್ಲಿ ಹರಿದಾಸ ಚಳುವಳಿಯು ತನ್ನ ಚಟುವಟಿಕೆಯ ಶಿಖರವನ್ನು ಮುಟ್ಟಿತ್ತು. ವ್ಯಾಸರಾಯರ ಶಿಷ್ಯರೂ ಕರ್ನಾಟಕ ಸಂಗೀತದ ಪಿತಾಮಹರೂ ಆದ ಪುರಂದರದಾಸರು, ಸಂತ ಕವಿ ಕನಕದಾಸರು ಮೊದಲಾದ ದಾಸವರೇಣ್ಯರು ರಾಜಧಾನಿಯಲ್ಲಿದ್ದರು. ಪುರಂದರದಾಸರು ತಮ್ಮ ಪದಗಳಲ್ಲಿ ವರ್ಣಿಸಿರುವ ಶ್ರೀ ಕೃಷ್ಣನ ಬಾಲಲೀಲೆಗಳನ್ನು ವಿಠ್ಠಲನ ಮಂದಿರದ ಕಂಬ, ತೊಲೆ, ಬೋದಿಗೆಗಳಲ್ಲಿ ಅಲ್ಲದೆ ದೇವಾಲಯದ ಎಲ್ಲ ಕಡೆಗಳಲ್ಲೂ ಕಂಡರಿಸಿದ್ದಾರೆ.

ವಿಠ್ಠಲನ ಮಂದಿರವು ಐದು ಅಡಿ ಎತ್ತರದ ಜಗಲಿಯ ಮೇಲೆ ನಿಂತಿದ್ದು, ಗರ್ಭಗುಡಿ, ಅರ್ಧ ಮಂಟಪ ಅಥವಾ ಮಧ್ಯರಂಗ ಮತ್ತು ಹೊರಗಿನ ಮಹಾಮಂಟಪಗಳನ್ನೊಳಗೊಂಡಿದೆ. ಗರ್ಭಗೃಹದ ಸುತ್ತಲೂ ಇರುವ ಪ್ರದಕ್ಷಿಣ ಪ್ರಾಕಾರವು ಉತ್ತಮ ಶಿಲ್ಪಕಲೆಯಿಂದ ಕೂಡಿದ್ದು, ಈ ಮಂದಿರದ ಅತ್ಯಂತ ವಿಶಿಷ್ಟ ಅಂಶವಾಗಿದೆ.

ಮಹಾಮಂಟಪದ ಕೆತ್ತನೆ ಕೆಲಸವಂತೂ ಅಸದಳ, ಅನ್ಯಾದೃಶ್ಯ. ಇಲ್ಲಿ ವಿಜಯನಗರದ ಶಿಲ್ಪಿಗಳ ಅತ್ಯಂತ ನಾಜೂಕಾದ ಮತ್ತು ನವಿರಾದ ಶಿಲ್ಪಕಲಾ ಕೌಶಲ್ಯವನ್ನು ಕಾಣಬಹುದು. ಮಂಟಪದ ಅಧಿಷ್ಠಾನದ ಮೇಲೆ ಕೆತ್ತಿರುವ ಕುದುರೆಗಳು, ಸೈನಿಕರು ಮತ್ತು ಹಂಸಗಳ ಸಾಲು ಚಿತ್ರಗಳು ಬಹಳ ಚಮತ್ಕಾರದಿಂದ ಕೂಡಿ ಜೀವತಳೆದಿವೆ.

**ಸಂಗೀತ ಕಂಬಗಳು**

ಈ ಮಂಟಪದಲ್ಲಿ ೫೬ ಕಂಬಗಳಿದ್ದು ಅದರಲ್ಲಿ ೧೬ ಕಂಬಗಳು ಮಧ್ಯದ ಅಂಕಣದಲ್ಲಿವೆ. ಉಳಿದ ೪೦ ಕಂಬಗಳು ಮಂಟಪದ ನಾಲ್ಕು ಬದಿಗಳಲ್ಲಿ ಹೊರಗಡೆ ಮುಖ ಮಾಡಿ ನಿಂತಿವೆ. ಈ ಕಂಬಗಳು ಕ್ರಿಯಾಪ್ರಧಾನ ಶಿಲ್ಪ ವಿನ್ಯಾಸದ ಉತ್ಕೃಷ್ಟ ಮಾದರಿಗಳಾಗಿವೆ. ಒಂದೇ ಅಖಂಡ ಶಿಲೆಯಲ್ಲಿ ಅದ್ಭುತ ರೀತಿಯಲ್ಲಿ ಹಲವು ಸಣ್ಣ ಸಣ್ಣ ಕಂಬಗಳನ್ನು ಬಿಡಿಬಿಡಿಯಾಗಿ ಕೊರೆದು ನಿರ್ಮಿಸಿ, ಅವುಗಳಲ್ಲಿ ಸಪ್ತಸ್ವರಗಳು ಹೊಮ್ಮಿಬರುವಂತೆ ಅಳವಡಿಸಿರುವುದು ಅತ್ಯಂತ ಅಭೂತಪೂರ್ವವಾದ ಅಂಶವೆಂದು ಲಾಂಗ್‌ಹರ್ಸ್ಟ್ ಮತ್ತೊಮ್ಮೆ ಉದ್ಗರಿಸಿದ್ದಾನೆ. ಈ ಕಂಬಗಳ ಅದ್ಭುತ ಕಲ್ಪನೆಯೇ ವಿಜಯನಗರದ ಶೈಲಿಯ ವಿಶಿಷ್ಟ ಅಂಶಗಳಲ್ಲೆಲ್ಲಾ ಪ್ರಧಾನವಾದುದು. ಈ ಅದ್ಭುತ ಸುಂದರ, ಸ್ವರನಿನಾದಿತ ಕಂಬಗಳ ನಡುವೆ ನಿಂತರೆ ಕಿನ್ನರ ಲೋಕದಲ್ಲೆಲ್ಲೋ ವಿಹರಿಸಿದಂತೆ ಭಾಸವಾದರೆ ಅಚ್ಚರಿಪಡಬೇಕಿಲ್ಲ.

ಮಂಟಪದ ದಕ್ಷಿಣ ಕಡೆಯ ಕಂಬಗಳಲ್ಲಿ ಯಾಳಿಯ ಶಿಲ್ಪಗಳನ್ನು ಮತ್ತು ಉತ್ತರ ಭಾಗದ ಕಂಬಗಳಲ್ಲಿ ನರಸಿಂಹನ ಶಿಲ್ಪಗಳನ್ನು ಪ್ರಮುಖವಾಗಿ ಕಾಣಬಹುದು. ಒಳಭಾಗದ ಕಂಬಗಳಲ್ಲಿ ಸುಂದರ ನರ್ತಕಿಯರ ಮತ್ತು ವಾದ್ಯಗಾರರ ಶಿಲ್ಪಗಳನ್ನು ಕಾಣಬಹುದು.

ಅರ್ಧ ಮಂಟಪದ ಮೇಲ್ಛಾವಣಿಯು ಹಾಳಾಗಿದೆ. ಕಮಲಗಳ ಚಿತ್ರಗಳಿಂದ ಕೂಡಿದ ಛಾವಣಿಯ ಬಂಡೆಗಳು ಈಗ ಕೆಳಗಡೆ ಬಿದ್ದಿವೆ. ಗರ್ಭಗುಡಿಯ ಮೇಲೆ ಇಟ್ಟಿಗೆಯಿಂದ ಕಟ್ಟಿರುವ ಶಿಖರವು ಬಹಳ ಜೀರ್ಣಾವಸ್ಥೆಯಲ್ಲಿದೆ. ದೇವರಿಲ್ಲದ ಗರ್ಭಗುಡಿಯಲ್ಲಿ ಕೇವಲ ಎರಡು ಪೀಠಗಳನ್ನು ಕಾಣಬಹುದಾಗಿದೆ.

**ಕಲ್ಲಿನ ರಥ**

ಮಹಾಮಂಟಪದ ಎದುರಿಗೆ ಹಂಪೆಯಲ್ಲೇ ಅತ್ಯಾಶ್ಚರ್ಯಕರವಾದ ಮಹಾದ್ಭುತವೊಂದು ಕಣ್ಣಿಗೆ ಬೀಳುತ್ತದೆ. ಅದೇ ಏಕ ಶಿಲೆಯಲ್ಲಿ ಕಡೆದು ನಿರ್ಮಿಸಿರುವ ೨೬ ಅಡಿ ಎತ್ತರದ ಕಲ್ಲಿನ ರಥ. ಇದೊಂದು ಸಂಕೀರ್ಣ, ಸ್ವಾರಸ್ಯಕರ ಶಿಲ್ಪ. ಶಿಲೆಯಲ್ಲಿ ರಥದ ಪ್ರತಿಕೃತಿಯನ್ನು ಅತ್ಯಂತ ಸೂಕ್ಷ್ಮ ವಿವರಗಳ ಸಹಿತ ಶಿಲ್ಪಿ ಕಂಡರಿಸಿದ್ದಾನೆ. ರಥವನ್ನು ಸುಂದರ ಗಜಗಳೆರಡು ಎಳೆಯುತ್ತಿರುವಂತೆ ಕೆತ್ತಿರುವುದಂತೂ ವಿಶೇಷ ಕಂಡರಿಕೆ. ಕಲ್ಲಿನ ಇರಚಿಯ ತುದಿಯಲ್ಲಿ ತಿರುಗುವ, ಕಮಲದ ಆಕಾರದಲ್ಲಿ ಕೆತ್ತಲಾಗಿರುವ ಚಿತ್ರಗಳು ಕಲ್ಪನೆಗೂ ಮೀರಿದ ಶಿಲ್ಪ ಚಮತ್ಕೃತಿಯಾಗಿವೆ. ಕಲಾ ವಿಮರ್ಶಕರು ಜಗತ್ತಿನ ಆಶ್ಚರ್ಯಗಳಲ್ಲಿ ಇದೂ ಒಂದೆಂದೂ ಪರಿಗಣಿಸಿದ್ದಾರೆ.

ದೇವಾಲಯದ ಆವರಣದಲ್ಲೇ ಆಗ್ನೇಯ ದಿಕ್ಕಿನಲ್ಲಿರುವ ಶಿಲಾ ಮಂಟಪವು ಬಹಳ ಸುಂದರವಾಗಿದ್ದು, ಲೋಕೋತ್ತರವಾದ ತನ್ನ ಶಿಲ್ಪಕಲಾ ಪ್ರೌಢಿಮೆಯಲ್ಲಿ ಮಹಾಮಂಟಪವನ್ನೇ ಮೀರಿಸುವಂತಿದೆ. ಇದನ್ನು ಕ್ರಿ.ಶ. ೧೫೫೪ರಲ್ಲಿ ಸದಾಶಿವರಾಯನು ವಿಜಯನಗರವನ್ನು ಆಳುತ್ತಿರುವಾಗ ನಿರ್ಮಿಸಲಾಯಿತೆಂದು ಶಾಸನವೊಂದು ತಿಳಿಸುತ್ತದೆ. ಈ ಮಂಟಪದ ಛಾವಣಿಯು ವರ್ಣಚಿತ್ರಗಳಿಂದ ಕೂಡಿತ್ತು ಎಂಬುದನ್ನು ಇಂದಿಗೂ ಉಳಿದು ಬಂದಿರುವ ಕುರುಹುಗಳಿಂದ ಕಾಣಬಹುದು. ಇದನ್ನು ವಿಠ್ಠಲನ ಡೋಲೋತ್ಸವಕ್ಕೆ (ಉಯ್ಯಾಲೆ) ಉಪಯೋಗಿಸುತ್ತಿದ್ದುದಾಗಿ ತಿಳಿದುಬರುತ್ತದೆ.

ನೈರುತ್ಯ ದಿಕ್ಕಿನಲ್ಲಿಯೂ ಮತ್ತೊಂದು ಮಂಟಪವಿದೆ. ಕಲ್ಯಾಣಮಂಟಪವೆಂದು ಕರೆಯಲಾಗುವ ನೂರು ಕಂಬಗಳ ಈ ಮಂಟಪವನ್ನು ಕೃಷ್ಣದೇವರಾಯನು ಕ್ರಿ. ಶ. ೧೫೧೬ರಲ್ಲಿ ನಿರ್ಮಿಸಿದನೆಂದು ಅಲ್ಲಿನ ಶಾಸನವೊಂದು ತಿಳಿಸುತ್ತದೆ. ಈ ಮಂಟಪವು ಸುಂದರ, ಸರಳ ಶಿಲ್ಪದಿಂದ ಕೂಡಿ ಆಕರ್ಷಕವಾಗಿದೆ.

**ಪುರಂದರ ಮಂಟಪ**

ದೇವಾಲಯಕ್ಕೆ ಅನತಿ ದೂರದಲ್ಲೇ ತುಂಗಭದ್ರೆಯ ದಡದಲ್ಲಿ ಮಂಟಪವೊಂದಿದೆ. ಪುರಂದರದಾಸರು ಈ




೧. ವಿಜಯನಗರ ಕಾಲದ ಕಲಾಶೈಲಿಗೆ ಉತ್ತಮ ಮಾದರಿಯೆನಿಸಿರುವ ವಿಜಯವಿಠ್ಠಲ ದೇವಾಲಯದ ಯಾಳಿಸ್ತಂಭಗಳಲ್ಲೊಂದು

೨. 'ಭಾಗವತ'ದಲ್ಲಿ ಉಕ್ತವಾಗಿರುವ ಕೃಷ್ಣನಿಗೆ ಸಂಬಂಧಿಸಿದ ಕತೆಗಳನ್ನು ಸ್ತಂಭದ ಮೇಲೆ ಚಿತ್ರಿಸಿರುವುದು

೧



೨



೧. ಗೌಡನಹಳ್ಳಿಯ ಶಿಲಾಶಾಸನ (ಈಗ ಇರುವಂತೆ)
(ಸೌಜನ್ಯ : ಶ್ರೀ ಮಹ್ಮದ್ ಝಡ್. ಜಫ್ರುಲ್ಲಾ ಮತ್ತು ಶ್ರೀ ಎಲ್. ನಾಗರಾಜು, ಚಿತ್ರದುರ್ಗ)

೨. ಶಿಲಾಶಾಸನದ ಪ್ರತಿ
(ಚಿತ್ರ : ಶ್ರೀ ಭವಾನಿ ಸ್ಟುಡಿಯೋ, ಚಿತ್ರದುರ್ಗ)

ಮಂಟಪದಲ್ಲೇ ವಾಸಿಸುತ್ತಿದ್ದರೆಂದು ಹೇಳಲಾಗುತ್ತಿದ್ದು ಅಲ್ಲಿಯ ಕಂಬವೊಂದರ ಮೇಲೆ ಅವರ ಮೂರ್ತಿಯನ್ನು ಕೆತ್ತಲಾಗಿದೆ.

ಹಂಪೆಯ ಪ್ರವಾಸಿಗಳು ಸಾಮಾನ್ಯವಾಗಿ ಈ ಮಂಟಪಕ್ಕೆ ತಪ್ಪದೆ ಭೇಟಿ ನೀಡುತ್ತಾರೆ. ದಾಸರು ತಮ್ಮ ಅಂತ್ಯಕಾಲದಲ್ಲಿ ಒಂದು ದಿನ ತಾಳ ತಂಬೂರಿಗಳನ್ನು ನುಡಿಸುತ್ತಾ, ಅವರ ಆರಾಧ್ಯದೈವ ವಿಠ್ಠಲನನ್ನು ಭಜಿಸುತ್ತಾ ತುಂಬಿ ಹರಿಯುತ್ತಿದ್ದ ತುಂಗಭದ್ರಾ ನದಿಯೊಳಗೆ ನಡೆದು ಈ ಪ್ರಪಂಚದಿಂದ ಮರೆಯಾದರೆಂದು ಐತಿಹ್ಯವೊಂದು ಹೇಳುತ್ತದೆ.